# ಕನ್ನಡ ಋತು ಸಂಹಾರ

ಎಸ್. ವಿ. ಪರಮೇಶ್ವರಭಟ್ಟ



ಪ್ರಕಾಶಕರು :

ಕಾವ್ಯಾಲಯ

ಮೈಸೂರು

# ಮೊದಲ ಮಾತು

೧

ಋತು ಸಂಹಾರ, ಭರತವರ್ಷದ ಹಿರಿಯ ಕವಿ ಕಾಳಿದಾಸನ ಮೊದಲ ಕೃತಿ. ಋತುಗಳ ಸಂಗ್ರಹ ಅಥವ ಗುಂಪು ಎನ್ನುವ ಅರ್ಥದ ಈ ಕೃತಿ, ವಿವಿಧ ವೃತ್ತಗಳಲ್ಲಿ ಬರೆದ ನೂರನಲವತ್ತುನಾಲ್ಕು ಶ್ಲೋಕಗಳನ್ನೊಳಗೊಂಡ ಆರು ಸರ್ಗಗಳ ಒಂದು ಖಂಡ ಕಾವ್ಯ. ಒಂದೊಂದು ಸರ್ಗದಲ್ಲಿ ಒಂದೊಂದು ಋತುವಿನಂತೆ ಕ್ರಮವಾಗಿ ಗ್ರೀಷ್ಮ, ವರ್ಷ, ಶರತ್, ಹೇಮಂತ, ಶಿಶಿರ, ವಸಂತ ಈ ಆರು ಋತುಗಳನ್ನು ಕುರಿತ ವರ್ಣನೆ ಇಲ್ಲಿ ಬಂದಿದೆ

೨

ಒಂದೊಂದು ಋತುವಿನಲ್ಲಿ ಒಂದೊಂದು ತೆರನಾದ ಗಾಡಿಯಿಂದ ಮೆರೆಯುವ ಪ್ರಕೃತಿದೇವಿಯ ವಿಭವಕ್ಕೆ ಮಾರುಹೋದ ತರುಣ ಕವಿ ಹೃದಯದ ಬೆಡಗಿನ ಒಂದು ಭಾವ ಈ ಕೃತಿಯ ಸರ್ಗ ಸರ್ಗದಲ್ಲಿಯೂ ಸೂಸಾಡುತ್ತದೆ. ಇಲ್ಲಿನ ಮೋಹಕವಾದ ವರ್ಣನೆಗಳಲ್ಲಿ ಎರಡು ಗುಂಪು ಕಾಣಬರುತ್ತದೆ: ಬೇಸಗೆಯಲ್ಲಿ, ಮಳೆಯಲ್ಲಿ, ಚಳಿಯಲ್ಲಿ, ಮಾಗಿಯಲ್ಲಿ, ಸುಗ್ಗಿಯಲ್ಲಿ ನಮ್ಮ ನೆಲ ಹೊಲ ಹೊಳೆ ಬಾನು ಬಯಲು ಏನಾಗಿರುತ್ತದೆ ಎನ್ನುವುದನ್ನು ವರ್ಣಿಸಿ ಹೇಳುವ ಶ್ಲೋಕಗಳು ಒಂದು ಗುಂಪು ಈ ಹೊರ ಆವರಣದ, ಪ್ರಕೃತಿಯ, ಪರಿಣಾಮ ನಲ್ಲನಲ್ಲೆಯರ ಮೇಲೆ ಏನು ಎನ್ನುವುದನ್ನು ವರ್ಣಿಸಿ ಹೇಳುವ ಶ್ಲೋಕಗಳು ಇನ್ನೊಂದು ಗುಂಪು. ಹೀಗೆ ಕೇವಲ ವರ್ಣನಾತ್ಮಕ ಗೀತೆಯಾಗಿರುವ ಈ ಪ್ರಣಯ ಪಂಚಾಂಗದಲ್ಲಿ ಭರತಖಂಡಕ್ಕೆ ಸಹಜವಾದ ಋತುಗಳ ವರ್ಣನೆ ಚೆಲುವಾಗಿ, ಸರಳವಾಗಿ ಬಂದಿದೆ ಪಾಂಥರು, ಪಾಂಥೆಯರು, ವಿರಹಿಗಳು, ಪ್ರಿಯರು, ಪ್ರೇಯಸಿಯರು, ಕುಲವಧುಗಳು, ಅಭಿಸಾರಿಕೆಯರು, ಅಬಲೆಯರು, ಧೀರರುಗಳು, ರಾಗಿಣಿಯರು, ಪ್ರಮದೆಯರು—ಇವರುಗಳ, ಕಾಡೆಮ್ಮೆ, ಕಾಡಾನೆ, ಕಾಡುಹಂದಿ, ಹಾವು, ಹುಲ್ಲೆ, ನವಿಲು, ಮೀನು, ಮಿಣುಕುಹುಳು—ಇವುಗಳ, ಸಾರಸ

ಕ್ರೌಂಚ, ಹಂಸ, ಬಲಾಕ, ಕೋಗಿಲೆ—ಇವುಗಳ; ನೀಪ, ಪಾಟಲ, ಬಕುಳ, ಬಂದುಗೆ, ಮೊಲ್ಲೆ, ಮಾಲತಿ, ಕಮಲ, ಕಲ್ಹಾರ, ಕನ್ನೈದಿಲೆ, ಬೆಟ್ಟದಾವರೆ, ಕೇದಗೆ, ಕಾಶ, ಕಿಂಶುಕ, ಶೇಫಾಲಿಕಾ, ಶ್ಯಾಮ, ಕುರವಕ, ಕುಸುಂಭ, ಕರ್ಣಿಕಾರ--ಇವುಗಳ ಒಂದು ಸೊಗಸಿನ, ಬಣ್ಣದ, ಗಾನದ, ಕಂಪಿನ ಮೆರವಣಿಗೆಯೆ ಇಲ್ಲಿದೆ.

೩

ಋತು ಸಂಹಾರದಲ್ಲಿ ಕವಿ ಪ್ರಕೃತಿಯನ್ನೂ ಮಾನವನನ್ನೂ ಚಿತ್ರಿಸಿರುವ ರೀತಿ 'ಹೊರಗಣ್ಣಿನ ನೋಟ'ಕ್ಕೆ ಕಂಡ ರೀತಿಯೆಂಬ ಅಸಮಾಧಾನ ಹಲವರಿಗೆ. ಅಪ್ರತಿಮ ಪ್ರತಿಭೆಯಿಂದಲೂ ಆಳವಾದ ಒಳನೋಟದಿಂದಲೂ ಶಾಕುಂತಲಾದಿ ಕೃತಿಗಳನ್ನು ರಚಿಸಿದ ಕಾಳಿದಾಸನೇ ಇದರ ಕರ್ತೃವಿರಬಹುದೇ-ಎಂಬ ಸಂದೇಹಕ್ಕೂ ಈ ಅಸಮಾಧಾನ ಎಡೆಗೊಟ್ಟಿದೆ. ಈ ಕುರಿತು ವಾದಪ್ರತಿವಾದಗಳನ್ನು ಇಲ್ಲಿ ವಿವರಿಸುವುದು ನಮ್ಮ ಕೃತಿ ಪರಿಚಯದ ವ್ಯಾಪ್ತಿಗೆ ಒಳಗಾಗದ ವಿಷಯ. ಇಲ್ಲಿ ಇಷ್ಟು ಹೇಳಿದರೆ ಸಾಕು: ಋತು ಸಂಹಾರ ಕಾಳಿದಾಸನ ಕೃತಿಯೆಂಬುದೆ ಬಹು ಮಂದಿ ವಿದ್ವಾಂಸರ ಇತ್ತೀಚಿನ ಮತ ಇದು ಆತನ ಪರಿಣತ ವಯಸ್ಸಿನ ಫಲವಲ್ಲ, ತರುಣ ವಯಸ್ಸಿನ ಪುಷ್ಪ, ಪ್ರಥಮ ಪುಷ್ಪ. ಈ ಕೃತಿಪುಷ್ಪದಿಂದ ಕವಿಯ ಕೀರ್ತಿ ಹೆಚ್ಚಾಗಲಿಲ್ಲ, ಆದರೆ ಅದು ಕುಂದಲೂ ಕಾರಣವಿಲ್ಲ ಸೃಷ್ಟಿಯಲ್ಲಿ ಕಾಣಬರುವ ಸೌಂದರ್ಯ ಕಲ್ಪನೆಯ ಒಂದು ಸರಳ ವರ್ಣನೆಗೆ ತೃಪ್ತಿಪಡುವವರಿಗೆ ಮಾತ್ರ ಈ ಕೃತಿ ಆನಂದದಾಯಿ.

೪

ಕನ್ನಡ 'ಋತು ಸಂಹಾರ' ಮೂಲದ ಭಾಷಾಂತರವಲ್ಲ, ಭಾವ ಗ್ರಹಣ. ಮೂಲದ ಎಲ್ಲ ಶ್ಲೋಕಗಳೂ ಇಲ್ಲಿ ಬಂದಿಲ್ಲ, ಬಂದಿರುವವೂ ಮೂಲದಲ್ಲಿನ ಕ್ರಮದಲ್ಲಿ ಇಲ್ಲ. ನನಗೆ ಸರಿತೋರಿದಂತೆ ಮೂಲದ ಭಾವಕ್ಕೆ, ಆಶಯಕ್ಕೆ ಹಾನಿ ಆಗದ ಹಾಗೆ ಹಲಕೆಲವು ಬದಲಾವಣೆಗಳನ್ನು ಮಾಡಿಕೊಂಡಿದ್ದೇನೆ ಅಲ್ಲದೆ, ಶ್ಲೋಕದ ಭಾವ ಆಶಯ ಹೊಳೆಯಲೆಂದು ಪ್ರತಿ ಶ್ಲೋಕಕ್ಕೂ ಒಂದು ಹೆಸರು ಕೊಟ್ಟಿದ್ದೇನೆ.

ನನಗೆ ತಿಳಿದ ಮಟ್ಟಿಗೆ ಕನ್ನಡದಲ್ಲಿ 'ಋತು ಸಂಹಾರ'ದ ಅನುವಾದ ಬರುತ್ತಿರುವುದು ಇದೇ ಮೊದಲೆಂದು ತೋರುತ್ತದೆ. ಈಚೆಗೆ ಧಾರವಾಡದ 'ಶ್ರೀ' ಎಂಬ ಪತ್ರಿಕೆಯಲ್ಲಿ ಶ್ರೀ ಕೇಶವಶರ್ಮಾ ಗಲಗಲಿಯವರು ಋತುಸಂಹಾರದ ಬೇರೊಂದು ಅನುವಾದವನ್ನು ಪ್ರಕಟಿಸುತ್ತಿದಾರೆ. ಆ ಅನುವಾದದಂತೆ ಇದೂ ಕನ್ನಡಿಗರಿಗೆ ಪ್ರಿಯವಾಗಿ, ಪ್ರಕೃತಿ ಸೌಂದರ್ಯವನ್ನೂ ಮಾನವ ಪ್ರೇಮವನ್ನೂ ಕುರಿತ ಕವಿಗುರುವಿನ ಸದಾಶಯಗಳು ಜನತೆಯಲ್ಲಿ ಪ್ರಚಾರವಾಗಲೆಂದು ಆಶಿಸುತ್ತೇನೆ.

ಈ ಕೃತಿ ಮೊದಲು 'ಜೀವನ' ಪತ್ರಿಕೆಯಲ್ಲಿ ಸುಂದರವಾಗಿ ಅಚ್ಚಾಯಿತು. ಈ ಕೃಪೆಗಾಗಿ ನಾನು ಆ ಪತ್ರಿಕೆಯ ಸಂಪಾದಕರಾದ ರಾಜಸೇವಾಪ್ರಸಕ್ತ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ. ಪುಸ್ತಕರೂಪದಲ್ಲಿ, ಕಾವ್ಯಾಲಯದ ಪ್ರಕಟನೆಯಾಗಿ, ಈ ಕೃತಿ ಈಗ ಮುದ್ದಾಗಿ ಮತ್ತೆ ಹೊರಬೀಳುತ್ತಿದೆ. ಈ ಉಪಕಾರಕ್ಕಾಗಿ ಕಾವ್ಯಮಾಲೆಯ ಪ್ರಕಾಶಕರಾದ ಶ್ರೀ ಚಿದಂಬರಂ ಅವರಿಗೆ ನಾನು ಋಣಿಯಾಗಿದೇನೆ. ಅವರ ಸೌಜನ್ಯವೂ ಸ್ನೇಹವೂ ನನ್ನ ಸಾಹಿತ್ಯ ಸೇವೆಗೆ ಒಂದು ವಿಶೇಷವಾದ ಪೋಷಕಬಲವಾಗಿ ಇದ್ದಿದೆ. ಪುಸ್ತಕವನ್ನು ತುಂಬ ಚೆನ್ನಾಗಿ ಅಚ್ಚುಮಾಡಿ ಕೊಟ್ಟಿರುವ ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್‌ನ ಒಡೆಯರಾದ ಶ್ರೀ ಜಿ. ಹೆಚ್. ರಾಮರಾಯರಿಗೆ ನನ್ನ ವಂದನೆಗಳು.

೨೫--೧೧-೪೭ **ಎಸ್. ವಿ. ಪರಮೇಶ್ವರಭಟ್ಟ**

ಶಿವಮೊಗ್ಗ

# ವಿ ವ ರ

# ಕನ್ನಡ ಋತು ಸಂಹಾರ

## ಗ್ರೀಷ್ಮ ಋತು ವರ್ಣನೆ

ತರಳ

ಪ್ರಚಂಡವಾದ ದಿನಕರಂ ಜಗವನೆಲ್ಲ ತಪಿಸಿರೆ
ಮನೋಜ್ಞವಾದ ಹಿಮಕರಂ ತಣ್ಪನಂತೆ ಸೂಸಿರೆ
ದಿನಾಂತ ಕಾಂತ ಸಮಯ ತಾನತಿ ಮನೋದವಾಗಿರೆ
ಜಲಾವಗಾಹದಿಂದಲಾನಂದ ಮಂದಿಗಾಗಿರೆ
ಗ್ರೀಷ್ಮನಿಂತು ಬಂದನೀ ಧರೆಗೆ ಮನ್ಮನೋಹರೆ!

ಚಂಪಕ

ಚಂಡದಾವಾನಲನ ಉರಿಗೆ ಬೆಂದುಳಿದಿರುವ
ಗರಿಕೆವುಲ್ಲುಗಳ ಕರಿಕಲಿಸಿಯುತ್ತಿರಲು
ಭೀಷ್ಮವಾತಾಹತಿಗೆ ಸಿಲುಕಿ ತಿರ್ರನೆ ತಿರುವ
ಒಣಗಿದೆಲೆ ಸುತ್ತಿತ್ತ ಹಾರುತಿರಲು
ಸುಡುವ ತಪನಾತಪಕೆ ಬಲಿದ ನೆಲದೊಳಾಗಿರುವ
ಬಿರುಗೊರಗಳಲ್ಲಲ್ಲಿ ತೋರುತಿರಲು
ಗ್ರೀಷ್ಮಋತುವಿನೊಳಿಂತು ಭೀಷಣವಾಗಿರೆ ವನವು
ನೋಡೆ ಬೆದರುವುದದು ನನ್ನ ಮನವು

ಸುಂದರಿ

ಚಂಡಕಿರಣಜಾಲದಿಂದೆ ರವಿಯು ಧರೆಯನೆಲ್ಲ ದಹಿಸೆ
ಧೂಳನೆರಚಿ ಕಸವನೆತ್ತಿ ಜನರ ಮನವ ಕಲಕಿಗೊಳಿಸೆ
ಕಾದ ಗಾಳಿ ರಭಸದಿಂದ ಸುಟ್ಟುರಿಪ್ಪೊಲುರಿದು ಬೀಸೆ
ಸರ್ವ ಜೀವ ಜಾಲವಿಂದು ಬೇಸಗೆಯಲಿ ನವೆವುದೆಂತೆ

ಮೃಗಜಲ

ಚಂಡತಪನ ತಾಪದುರಿಗೆ ನೀರಡಸಿರೆ ಗಂಟಲೊಣಗೆ
ಬಿಸಿಲ ಝುಳಕೆ ಮಿರುಮಿರುಗುತೆ ದೂರದಾ ವನಾಂತದೆಡೆಗೆ
ಹೊಳೆಯುತಿರುವ ನೆಲವ ನೋಡಿ ನೀರಿನೊಂದು ಹೊಳೆಯುದೆಂದು
ಬಗೆದು ಮೃಗಗಳತ್ತಲೋಡಿ ನೋಯುತಿಹವು ಬರಿದೆ ನೊಂದು

ಧಗೆ

ಎಲೆಗಳೊಣಗಿ ಉದುರಿಹೋದ
ಮರದ ಬರಲುಗೊಂಬೆಗಳಲಿ
ವಿಹಗ ನಿವಹ ಮೌನದಿಂದ
ಸುಯ್ಯು ಸುಮ್ಮನಿದ್ದಿದೆ.
ಬಿಸಿಲ ಬೇಗೆಯುರಿಗೆ ಬೆಂದು
ಬಯಲುಸೀಮೆಗಳನು ಉಳಿದು
ಬೆಟ್ಟದೆಡೆಯ ಮರಗಳೆಡೆಗೆ
ಕೋತಿ ಬಳಗವೆದ್ದಿದೆ.

ತೃಷ್ಣೆ—೧

ನೊರೆದೀಳಿದಿರೆ ಲಾಲಾರಸ
ಕಟವಾಯನು ಸುತ್ತಿ
ಜೋಲುತ್ತಿರೆ ಕೆನ್ನಾಲಗೆ
ಮೊಗವನು ಮೇಲೆತ್ತಿ
ಬಾಯಾರಿದ ಮಹಿಷೀಕುಲ
ಗಿರಿಗಹ್ವರವುಳಿದು
ನೀರರಸುತಲೈತರುತಿದೆ
ಬನಬನವಲಿ ಸುಳಿದು.

ತೃಷ್ಣೆ—೨

ನೀರಾರಿ ಕೆಸರೊಣಗಿ ಭದ್ರಮುಷ್ಟಿಯ ಜೊಂಡು
ಬೆಳೆದಿರಲು ಬರುಗೊಳವನೊಂದ ನೋಡಿ
ರವಿಕಿರಣದುರಿಯಿಂದೆ ಸೀದು ಸಿಡಿಮಿಡಿಗೊಂಡು
ಕಾಡುಹಂದಿಯದೊಂದು ಮುಸುಡು ತೀಡಿ
ಕೋರೆದಾಡೆಗಳಿಂದ ಬಗೆಯುತಿಹುದೋರಂತೆ
ಭೂತಲಕೆ ಬಾದಣವ ಕೊರೆಯುವಂತೆ

ಸರಸ್ಸು

ವನಗಜಗಳೈತಂದು ಘೋರ ಘರ್ಷಣೆಗೈದು
ಒಂದರೊಡನೊಂದಿರದೆ ಸೆಣಸಾಡಿದಂದು
ತಾವರೆಯ ಲತೆ ಹರಿದು ಮತ್ಸ್ಯಜಾಲವು ಅಳಿದು
ಪಂಕಮಯವಾಗಿರುವುದೀ ಸರಸಿಯಿಂದು

ದಾವಾನಲ—೧

ನವ ಕುಸುಂಭವವೋಲು ದೊಸಕಾಂತಿಯಿಂದೆಸೆದು
ಸ್ವಚ್ಛ ಸಿಂಧೂರದೊಲು ಮಿನುಗುತುರಿದು
ತರುಲತೆಗಳೆಲೆಕೊನೆಯನಾವರಿಸಿ ಧಗಧಗಿಸಿ
ದಿಗ್ದಿಗಂತವನೆಲ್ಲ ಮುರಿದು ಹುರಿದು
ಪ್ರಬಲ ಪವನೋದ್ಧೂತ ಚಂಡ ದಾವಾನಲವು
ಧರೆಯನೆಲ್ಲವ ಬಾಚಿ ದಹಿಸುತಿಹುದು

ದಾವಾನಲ—೨

ಗಾಳಿ ಬೀಸಿತೋ ಬೆಂಕಿ ಹೊತ್ತಿತೋ
ಗಿರಿಯ ದರಿಯನಾವರಿಸಿ
ಛಳಿರು ಛಟಿಲೆಂದು ಬಿದಿರು ಸುಟ್ಟಿತೋ
ಮೆಳೆಗಳೊಣಗಿ ಧಗಧಗಿಸಿ
ಖಗವು ನೊಂದಿತೋ ಮೃಗವು ಬೆಂದಿತೋ
ಕಾಡು ಕಿಚ್ಚಿನಲಿ ನಶಿಸಿ.

ದಾವಾನಲ--೩

ಶಾಲ್ಮಲೀ ವನಂಗಳಲ್ಲಿ ಬೆಂಕಿ ಹೊತ್ತಿ ಗಾಳಿ ಬೀಸಿ
ಮರದ ಪೊಟ್ಟರೆಗಳ ದಹಿಸೆ ಕನಕಗೌರವರ್ಣವೆರಸಿ
ಮಿಂಚುತಿಸದು ದೀಪ್ತವಾಗಿ ಭೂರಿಕೆಂಡಗಳನು ಸೂಸಿ
ವನವನೆಲ್ಲ ಬೂದಿಗೊಳಿಸುತಿರುವುದುರಿ ಭಡಾಳಿಸಿ

ಮಾನವ ಲೋಕ

ಚಂದನರಸದನುಲೇಪನವೆರಸಿದ
ತೆಳ್ಳನೆ ದುಗುಲವ ಧರಿಸುವರು.
ಮೇಲುಪ್ಪರಿಗೆಯ ಬಿಸಿಲುಮುಚ್ಚಿನಲಿ
ತೆಂಗಾಳಿಗೆ ಮೈಯಾನುವರು
ತಣ್ಣನೆ ತುಂತುರು ಸೀರ್ಪನಿ ಚಿಮ್ಮುವ
ಜಲಯಂತ್ರವ ತಾ ನೆಮ್ಮುವರು.
ಇನಿಯಳು ತಂದಿಹ ಶೀತಳ ಸುಖಕರ
ಪಾನೀಯಕೆ ತುಟಿ ತೆರೆಯುವರು.
ಜೇನ್ಸುಸಿ ಜಗುಳುವ ವೀಣಾಗಾನದ
ಪೆಂಪಿನಲುಸಿಗೆ ಕರಗುವರು
ಹಾಲನು ಹೋಲುವ ಹುಣ್ಣಿಮೆ ತಿಂಗಳ
ಅಮೃತದ ಲಹರಿಯೊಳದ್ದುವರು.

ಆಮಿಷ

ತೈಲ ಕಷಾಯ ಸ್ನಾನಾನಂತರ
ತೆಳ್ಳನೆ ಬೆಳ್ಳನೆ ಚೀನಾ ಅಂಬರ
ತನುವಿನೊಳೊಪ್ಪುವ ಲಲನೆಯರು
ಚಂದನ ಪಂಕವಿಲೇಪದಿ ಮೆರೆದಿರೆ
ಕಾಡಿಗೆಗಣ್ಣಿನ ನೋಟವನೆಸೆದಿರೆ
ಅರಿಹರಿಳಿಯೊಳು ಸೋಲದರು !

## ಪ್ರಭಾತ

ಝಣಿರು ಝಣಿರೆನುತಂದದ ನೂಪುರ
    ರಮಣಿಯರಡಿಗಳಲಿಂಪ್ಪುತಿರೆ
ಮಘಮಘಿಸುವ ಹೊಸ ಮಲ್ಲಿಗೆ ಹೂ ಸರ
    ಸಿರಿಮುಡಿಯೊಳು ರಾರಾಜಿಸಿರೆ
ಅಲತಿಗೆ ರಸವನು ತೀರಸ ಸುಂದರ
    ಚರಣಕಮಲದಲಿ ರಂಜಿಸಿರೆ
ಲಲನೆಯರಂದದ ರೂಪವಿಲಾಸಕೆ
    ಯುವಜನ ಸೋಲುತ್ತಿದ್ದುದು!

## ನಿಶೆ

ಚಾರು ಚಂದಿರನುದಿಸಿ ಬಂದಿರೆ
ತಾರಕೆಗಳಲ್ಲಲ್ಲಿ ಮಿನುಗಿರೆ
    ಸಂಜೆ ಮನಸೆಳೆಸಂದದ
ಓರೆ ನೋಟದ ಮುಗುಳು ನಗೆಯಿರೆ
ಸಾರನಾಟದ ಬೆಡಗು ಬಗೆಯಿರೆ
    ಸತಿಯರೆನ್ನನು ಸೆಳೆದರು..

## ಚೆಲುವೆ

ನೀಲುಪ್ಪರಿಗೆಯ ಮಲಗುವ ಮನೆಯಲಿ
    ಲಲನೆಯರಂದವ ಸವಡಿಸಿರೆ
ಅವರೊಂದಂದವ ನೋಡುವ ಬಗೆಯಲಿ
    ಚಂದಿರ ಬೇಗನೆ ಮೂಡಿ ಬರೆ
ನೋಡಿಯೆ ನಾಚಿದನೆನೆ ಬಿಳುಪೇರಿದ-
    ನೊಮ್ಮೆಗೆ ನಿಶಿ ಬೆಳಗಾಗುತಿರೆ.

## ಸ್ವಸ್ತಿ

ನಳಿನವನದ ಕೊಳಗಳಿಂದೆ ಪಾಟಲಗಳ ಹೂಗಳಿಂದೆ
ತಣ್ಣೀರಿನ ಮೀಹದಿಂದೆ ಚಂದ್ರಿಕಾ ವಿಹಾರದಿಂದೆ
ಮುತ್ತುಮಣಿಗಳೊಡವೆಯಿಂದೆ ಚಂದನದ ವಿಲೇಪದಿಂದೆ
ರಮ್ಯವೆನಿಸಿ ಮೆರೆಯುತಿರುವ ಇಂಥದೊಂದು ಬಿಸಿಲ ದಿನವು
ಉಪ್ಪರಿಗೆಯ ಸೆಜ್ಜೆವನೆಯ ವೇಣುಗಾನದುಲಿಯ ಸವಿಯು
ಸೊಗವನಿತ್ತು ಎರೆಯನೆದೆಯ ಪ್ರೇಮದಮೃತ ರುಚಿಯನಿತ್ತು
ಕಾಂತೆ ನಿನ್ನ ಚಿರಂ ನಲಿಸಿ ಸಂತಸದೊಳಗಿರಿಸಲಿ

# ವರ್ಷ ಋತು ವರ್ಣನೆ

### ಆಗಮನ

ಹನಿಗರೆವ ಕರಿಮೋಡ ಮದಿಸಿದಾನೆವೊಲಾಗೆ
ಹೊಳೆದೆಸೆವ ಕೋಲ್ಮಿಂಚು ಬಾವುಟವದಾಗೆ
ಮೃದು ಮಧುರ ಮೊಳಗುಗಳ ದನಿಯು ಮದ್ದಳೆಯಾಗೆ
ಸುರಿವಾಲಿಕಲ್ಲುಗಳೆ ಹೂಗಳವೊಲಾಗೆ
ರಾಜನವೊಲಂಬರದಿನಿಳಿದು ಬಹ ಮಳೆರಾಯ-
ನೆಲೆ ರಮಣಿ ನೋಡುವರ ಕಣ್ಣಗಿಂಬಾಗೆ.

### ಮುಗಿಲಮೋಹರ

ನೋಡು ನಭದಲಿ ಮುಗಿಲ ಮೋಹರ
ನೀಲ ನೈದಿಲೆ ದಳದ ಸುಂದರ
ಕಾಂತಿಯಂದವ ತಳೆದಿದೆ
ಅರೆದ ಕಾಡಿಗೆಯಂತೆ ಕಪ್ಪಗೆ
ನುತ್ತೆ ತೇಲುತಲತ್ತ ನುಣ್ಣಗೆ
ಮೋದ ಸಂದಣಿಸುತ್ತಿದೆ.

### ಜಲದ

ತೋಯಭಾರದೆ ಬಾಗಿದೆಮಗೆ ಆಸರೆಯೀವ-
ನೀತನುನ್ನತನೆಂದು ಮನದೆ ಬಗೆದು
ವಿಂಧ್ಯದೆಡೆಯನು ಸೇರಿ ಆದರದವಿಯಡಿಗಳಲಿ
ಹೊಸ ಮಳೆಯು ಹನಿ ಸುರಿಸಿ ತಂಪನೆರೆದು
ಕಾರ್ಗಾಲದೀ ಜಲದ ಬೇಸಗೆಯಲುರೆ ಬೆಂದ
ಬನದ ಬೇಗೆಯನಿಂದು ತವಿಸಲಿಹುದು.

ಸಾಂತ್ವಸ

ಕುವಲಯದ ದಳದಂತೆ ನೀಲಿ ಬಣ್ಣವ ತಳೆದು
ತೋಯ ಭಾರದೊಳಂತೆ ತೂಗಿ ತೊನೆದು
ಮೆಲ್ಲೆಲರ ನೋಂಕಿನಲಿ ಮಂದಮಂದಂ ಸುಳಿದು
ಇಂದ್ರಚಾಪವ ಧರಿಸಿ ಮೈಯ ಮೆರೆದು
ವಿರಹಿಣಿಯರೆದೆಗುದಿಯ ತಣಿಪಂತೆ ತೋರುವುದು
ಮಳೆಗಾಲದೀ ಮುಗಿಲು ಕಣ್ಣಿಗಿಂಪದು.

ಮುಗಿಲುಸೈನಿಕ

ಮಳೆಯಬಿಲ್ಲಿಗೆ ಮಿಂಚುಹಗ್ಗವನೆಳೆದು ಮಿಗೆ ಹೆದೆಯೇರಿಸಿ
ಸಿಡಿವ ನೀರಿನ ಹರಿತವಾಗಿಹ ಹನಿಯಬಾಣವ ನೇರಿಸಿ
ಗುಡುಗುಮದ್ದಲೆಯೊಡನೆ ಮುಂದಕೆ ಮುಗಿಲುಸೈನಿಕ ಧಾವಿಸಿ
ಬಿಡದೆ ಕಾಡುತಲಿರುವನೀ ಪರಿ ದಾರಿಗರ ಮನ ನೋಯಿಸಿ.

ಮಂದಮಾರುತ

ನವ್ಯ ಸಲಿಲ ಸಂಗದಿಂದ ತಣ್ಪನಾಂತು ಸುಳಿಯುತ
ಕುಸುಮಭಾರದಿಂದ ಬಾಗಿ ನಿಂದ ಲತೆಯ ಕುಣಿಸುತ
ಕೇತಕೀ ಪರಾಗಮೊಂದು ಗಂಧವೆರೆದು ಬೀಸುತ
ಪಥಿಕ ಜನರ ಮನವ ಕದಿವುದಿಂದು ಮಂದಮಾರುತ.

ವಾರಿವಾಹಿನಿ

ಹುಲ್ಲು ಕಡ್ಡಿ ಧೂಳು ಕೀಟಗಳನು ಹೊತ್ತು ಹಾಡುತ
ಭುಜಗದಂತೆ ವಕ್ರಗತಿಯೊಳತ್ತಲಿತ್ತಲೋಡುತ
ಕುಪ್ಪಳಿಸುವ ಕಪ್ಪೆಗಳಿಗೆ ಭೀತಿ ತೋರಿ ಆಡುತ
ಭೋರೆನುತ್ತ ಮಳೆಯನೀರು ಹರಿಯುತಿಹುದು ಸಂತತ.

ವೇಗಗಾಮಿನಿ

ವೇಗವಾಗಿ ಹರಿದು ಬರುವ ಕೊಳೆಯ ನೀರು ಸೆಳೆಯಲು
ದಡದ ಬದಿಯ ಮರಗಳೆಲ್ಲ ಕೊಚ್ಚಿ ಉರುಳಿ ಬೀಳಲು
ಭ್ರಮಿತ ದುಷ್ಟ ಕಾಂತೆಯಂತೆ ಅಮಿತ ವೇಗಗಾಮಿನಿ
ರಭಸದಿಂದ ಧಾವಿಸುತಿದೆ ಕಡಲ ಕಡೆಗೆ ವಾಹಿನಿ.

ಭೂಕಾಂತೆ

ಹುಡಿ ಮಾಡಿದ ವೈಡೂರ್ಯದ
ಹಳಕುಗಳೆಸೆವಂತೆ
ಹಸುರ್ವುಲ್ಲಿನ ಪೊಸಮೊಳಕೆಗ-
ಳೆತ್ತಲು ತಲೆದೋರೆ
ಕಂದಳಿದಳ ನೆಲದಿಂದೊಗೆ-
ದೊಮ್ಮೆಗೆ ಮೈದೋರೆ
ಮಿನುಮಿನುಗುವ ಮಿಂಚಿನ ಹುಳು
ಬೆಳಕಿನ ಕಿಡಿ ಬೀರೆ
ತೋರುವಳೀ ಮೈಸಿರಿಯೊಳು
ಸುಂದರ ಭೂಕಾಂತೆ
ಶುಕ್ಲೇತರ ರತ್ನಾಭರ-
ಣಂಗಳಿನೆಸೆವಂತೆ.

ಗಿರಿರಾಜ

ಬಿಳಿಮುಗಿಲವೋಲಂತೆ ಗಿರಿಯು ಶಿಖರದೊಳೆಸೆದು
ಬೆಟ್ಟದಾವರೆ ಹೂಗಳರಳುತಿರಲು
ಪೊಳೆವ ಮಿಂಚುಗಳಂತೆ ಅಲ್ಲಲ್ಲಿ ಮಿರುಮಿರುಗಿ
ನಿರ್ಝರಗಳೋರಂತೆ ಹರಿಯುತಿರಲು
ಇಂದ್ರಚಾಪಗಳಂತೆ ಮನಸೆಳೆದು ನವಿಲುಗಳು
ಸಂತಸದೆ ಗರಿಗೆದರಿ ಕುಣಿಯುತಿರಲು
ನಭದಂತೆ ಭೂಧರವು ಹೊಸತೊಂದು ಕಾಂತಿಯುಲಿ
ನಯನಕೌತುಕವಾಗಿ ರಂಜಿಸಿಹುದು.

ವನಲಕ್ಷ್ಮಿ

ತಂಬೆಲರ ತೀಟದಲಿ ತೂಗುತಿಹ ತರುಲತೆಯು
ಕೊನೆಗಳಿಂ ಮೈಬಾಗಿ ಕುಣಿವಳೆನಲು
ಗರಿವೊಡೆದ ಕೇದಗೆಯು ತೆನೆಗಳಿಂ ನಗುವಳೆನೆ
ಬಿರಿದ ನೀಪಗಳಿಂದ ನಲಿವಳೆನಲು
ನವಸಲಿಲಸೇಕದಿಂ ಮಿಂದು ಮಡಿಯಾದಳೆನೆ
ಮೆರೆವಳೀ ವನಲಕ್ಷ್ಮಿ ಮೋಹಿನಿವೊಲು.

ಮಳೆರಾಯ

ನರುಗಂಪು ಸೂಸುತಿಹ ಮೊಲ್ಲೆ ಮಾಲತಿವೆರೆದ
ಬಕುಳಮಾಲೆಯ ಕಟ್ಟಿ ತುರುಬಿಗಿಟ್ಟು
ಅರಳಿದೆಳನೀಪಗಳ ಚೆಲುವಾದ ಹೊಸದೊಂದು
ಅವತಂಸವನು ರಚಿಸಿ ಕಿವಿಯೊಳಿಟ್ಟು
ನಲ್ಲ ನಲ್ಲೆಯನಲಂಕರಿಸಲೆಂತೆಳಸುವನೊ
ಪ್ರೇಮಪುಳಕಿತನಾಗಿ ರಸಿಕನಾಗಿ
ಕಾಂತಾರಕಾಂತೆಯನ್ನಂತಲಂಕರಿಸುವನು
ಮಳೆರಾಯನೊಲುಮೆಯಧಿರಾಜನಾಗಿ.

ನವಿಲು

ಪ್ರೀತಿಸಿ ಮುದ್ದಿಸಿ ನಲಿವಾತುರದಲಿ
ಬಿಚ್ಚಿದ ಬಣ್ಣದ ಗರಿಗೆದರಿ
ಅಮಿತಾನಂದದ ಅತ್ಯುತ್ಸವದಲಿ
ಒಲವಿನ ಕೇಕೆಯ ದನಿದೋರಿ
ನರ್ತಿಸತೊಡಗಿವೆ ನವಿಲುಗಳಿಂದು
ಮಳೆಗಾಲವು ತಲೆದೋರಿಹುದೆಂದು.

ಹರಿಣಾಲೋಕ

ಚಂಚಲೋತ್ಪಲ ನಯನ ಕಾಂತಿಯ
ಬೀರಿ ಭೀತರವೋಲು ನೋಡುವ
ಹುಲ್ಲೆಮರಿಗಳ ನಿವಹವು
ಪುಳಿನತಾಣದೊಳಂಜುತೋಡುವ
ನೋಟವೆಮಗತಿ ಕೌತುಕಾವಹ
ವೆನಿಸಲೆಸಿತಾನಂದವು.

ಹೆಣ್ಣಾನೆ

ವಿಮಲೋತ್ಪಲ ಶೋಭಾನ್ವಿತ ಗಂಡಸ್ಥಲದೆಡೆಯೊ
ಸ್ರವಿಸುತ್ತಿಹ ಮದಜಲದಲಿ ಭೃಂಗಾವಳಿ ಕೆಡೆಯೆ
ಹೊಸಮೋಡದ ಹೊಸಮೊಳಗಿಗೆ ತಾನುರೆ ಮದವೇರಿ
ಘೀಳಿಡುತಿದೆ ಕಾಡಾನೆಯ ಬಳಗದ ವೈಯಾರಿ.

ಪಥಿಕವನಿತೆ

ಮಣಿದೊಡವುಗಳ ಕಳೆದು ಕುಸುಮಹಾರವ ತೆಗೆದು
ಅಗರುಗಂಧಾದಿಗಳ ಲೇಪವುಳಿದು
ಕಮಲನಯನಗಳಿಂದಲಿಳಿವ ಕಣ್ಣೀರಿನಲಿ
ಚಾರು ಚೆಂದುಟಿಗಳನು ನೆನಸಿ ನೊಂದು
ಪತಿವಿರಹ ದುಃಖದಲಿ ಪಥಿಕವನಿತೆಯರಿಂದು
ಪರಿತಪಿಸುತಿಹರಿಂತು ಖೇದವಾಂತು.

ಅಭಿಸಾರಿಕೆ

ಕವಿದ ಕಾರ್ಮೋಡಗಳ ಘೋರಾಂಧಕಾರದಲಿ
ಗುಡುಗು ಸಿಡಿಲ ಗಭೀರ ಘೋಷದಲ್ಲಿ
ಬೆದರಿದಭಿಸಾರಿಕೆಯರತ್ತಿತ್ತ ಸುಳಿಯುವರು
ಕೋಲ್ಮಿಂಚು ಕಾಣಿಸಿದ ದಾರಿಯಲ್ಲಿ.

ಪಾಂಥ

ಬಳ್ಳಿಮಿಂಚು ಮೇಣಿಂದ್ರಧನುವಿನೊಂದುಡಿಗೆಯೊಸೆಯಲಂತೆ
ತೋಯಭರದೆ ಲಂಬಾಯಮಾನವೆಂದೆನಿಪ ಮುಗಿಲ ನೋಡಿ
ದಾರಿ ನಡೆವ ಜನ ಬೆರಗುಗೊಳ್ಳುತಿರೆ ಮೋಹವಿವಶರಂತೆ
ಗೆಜ್ಜೆ ಪಟ್ಟೆ ಮಣಿಕುಂಡಲಂಗಳಿಂದೊಪ್ಪಿ ಮೆರೆಯುವಂದು
ಕಾಂತಿವೆತ್ತ ನವವಧುಗಳೈದಿ ಕಣ್ಮನವ ಸೆಳೆದು ನಿಂದು
ಎಂತು ಮೇಘ ತಾವಂತವೋಘವಾದೊಂದು ರೀತಿಯಲ್ಲಿ
ಪಾಂಥಯುವಜನರ ಬಗೆಯ ಕದಿಯುವರು ಮಳೆಯ ದಿನಗಳಲ್ಲಿ

ಆಕರ್ಷಣ

ಕಪ್ಪಾದ ನಿಡುಜಡೆಯು ಬೆನ್ನಿನೊಳಗೋಲಾಡೆ
ಒಪ್ಪಾದ ಅವತಂಸ ಕಿವಿಯೊಳಾಡೆ
ಸೊಂಪಾದ ತಂಬುಲದ ಚೆಂದುಟಿಯು ನಗೆದೋರೆ
ಚೆಲುವಾದ ಮಣಿಹಾರ ಎದೆಯ ಬೆಳಗೆ
ಆರ ಬಗೆ ಸೆಳೆಯದಿಹುದೀ ಬಗೆಯಲಂಕಾರ–
ವೀ ಮಳೆಯ ದಿನಗಳಲಿ ಸುಂದರಿಯರ.

ವಧೂಜನ

ಮೊಲ್ಲೆ ಸುಮ ಮಂಜರಿಯ ಅವತಂಸವನು ರಚಿಸಿ
ಮುದ್ದಾಗುವಂತದನು ಕಿವಿಯೊಳಿರಿಸಿ
ಬಕುಳ ಕೇದಗೆ ನೀಪದರಳುಮಾಲೆಯ ಕಟ್ಟಿ
ಚೆಲುವಾಗುವಂತದನು ಮುಡಿಯೊಳಿರಿಸಿ
ನಮ್ಮ ಕಣ್ಮನ ಸೆಳೆದು ಸಂಮೋಹನಂಗೊಳಿಸಿ
ಮೆರೆಯುತಿಹರೀ ವಧುಗಳಿಂತು ನಲಿಸಿ.

ಭೀರು

ಭೀತಿ ಹುಟ್ಟಿಸುವಂಥ ಗುಡುಗು ಮಿಂಚಿಗೆ ಹೆದರಿ
ಮೈ ನಡುಗಿ ಮನವುಡುಗಿ ಒಳಮನೆಯ ಸೇರಿ
ಮುನ್ನಿನಪರಾಧಗಳನೆಲ್ಲವನು ಮನ್ನಿಸುತೆ
ಸುಖಿಪರಬಲೆಯರಿಂದು ನಲ್ಲರೊಡಗೂಡಿ.

ಸಮಾಗಮ

ಅಗರು ಚಂದನ ಹಚ್ಚಿದಂಗವು ಸುತ್ತ ಸೌರಭವೆರೆದಿರೆ
ಜಡೆಯ ಹೂವಿನದಂಡೆ ಪರಿಮಳ ಸುತ್ತ ಘಮಘಮಿಸುತ್ತಿರೆ
ಗುಡುಗಿನಬ್ಬರ ಕೇಳಿದಾಗಳೆ ಇತ್ತಲಬಲೆಯರೊಮ್ಮೆಗೆ
ಸೇರಿ ಒಳಮನೆಗೋಡಿ ಓಪರನಪ್ಪಿಕೊಳುವರು ಬಿಮ್ಮಗೆ.

ಸ್ವಸ್ತಿ

ತರುಲತೆಗಳ ಬಂಧುವೆನಿಸಿ
ಖಗಮೃಗಗಳ ತ್ರಾಣವೆನಿಸಿ
ಪ್ರಣಯಿಜನರ ಪ್ರಾಣವೆನಿಸಿ
ಅಮಿತ ಗುಣಗಳಿಂದಲೆಸೆದು
ಕಾಮಿನಿಯರ ಮನವ ಸೆಳೆದು
ನಲಿಸಲಿರುವ ವರ್ಷಋತುವು
ಕಾಂತೆ ನಿನ್ನ ಮನಸಿನೆಲ್ಲ
ಕಾಮನೆಗಳ ಸಲಿಸಲಿ!

# ಶರದೃತು ವರ್ಣನೆ

ಆಗಸದ

ಕಾದಾಂಬರ ಸಂಕ್ಷೋಭಿತೆ
ಚಂದ್ರೋದಯ ಲಸಿತೆ
ಹೇಮಾಂಬುಜ ರುಚಿರಾನನೆ
ಇಂದೀವರ ರದನೆ
ಸಾರಸ ಕುಲ ಕಲಕಲ ರವ-
ದಾಲಾಪದ ಬಿನದೆ
ಪರಿಣತವಹ ಶಾಲಿಯ ವನ-
ದಾನತ ತನು ಶರದೆ
ನವ ವಧುವಿನ ಶೃಂಗಾರದೆ
ತೋರಿಹಳಿದೊ ಮುದದೆ.

ನಭೋಂಗಣ

ಬೆಳ್ಳಿಯಂತೆ ಶಂಖದಂತೆ ಬಿಸಜಸೂತ್ರ ರಾಜಿಯಂತೆ
ನೀರು ಸುರಿಸಿ ಹಗುರವಾಗಿ ಬೆಳ್ಳಗಿರುವ ಮುಗಿಲ ಸಂತೆ
ಗಾಳಿ ಬೀಸಲತ್ತಲಿತ್ತ ಚೆದರಿ ತೇಲಿ ಹೋಗುತಿರಲು
ನೂರು ಚಾಮರಂಗಳಿಂದ ಸೇವೆಗೊಳುವ ಅರಸಿನಂತೆ
ರಮ್ಯವಾಗಿ ತೋರುತಿಹುದು ಕಣ್ಣಿಗೀ ನಭೋಂಗಣಂ

ಬಾನಬಯಲು

ಇಂದ್ರಚಾಪವಿಂದು ಮುಗಿಲನೊಡೆದು ಮೂಡಿ ತೋರದು
ಬಾನ ಗುಡಿವ್ರೊಲಿಂದು ಮಿಂಚು ಹೊಳೆದು ಮೂದಲಿಸದು
ಆಗಸವನು ನೋಡಲೆಂದು ನವಿಲು ಗಿರಿಯನೇರದು
ಆ ಬಲಾಕನಿವಹವಿಂದು ರೆಕ್ಕೆ ಬೀಸಿ ಹಾರದು.

ಗಗನ ದೇಶ

ಮೋಡವೆಲ್ಲವು ಚದುರಿಹೋಗಿರೆ
ಚಂದ್ರ ತಾರೆಗಳಿಂದಲೊಪ್ಪುವ
ನೀಲ ನಿರ್ಮಲ ಗಗನ ದೇಶವು
ಮನವನಪಹರಿಸಿರುವುದು
ಪಚ್ಚೆಯಂದದಿ ಹೊಳೆವ ನೀರೊಳು
ರಾಜಹಂಸಗಳಿಂದಲೊಪ್ಪುವ
ನೀಲ ನೈದಿಲೆಗೊಳನ ಹೋಲುವ
ತೆರದೊಳಿಂಬಾಗಿರುವುದು.

ಶಾರದಯಾಮಿನಿ

ಸುಂದರ ಚಂದಿರ ಬಿಂಬವೆ ಮೊಗವೆನೆ
ತಾರಾಗಣ ಆಭರಣವೆನೆ
ತಿಳಿ ಬೆಳುದಿಂಗಳೆ ಚೀನಾಂಬರವೆನೆ
ವಿಕಸಿತ ನೈದಿಲೆ ಹಸಿತವೆನೆ
ಶಾರದಯಾಮಿನಿ ಬೆಳೆಯುವಳನುದಿನ
ವರ್ಧಿಸುತಿಹ ನವಯುವತಿಯೆನೆ.

ಚಂದ್ರ

ಮನವ ಸೆಳೆಯುವ ಕಿರಣಮಾಲೆಯಿನೆಸೆವ ಸುಂದರಚಂದಿರ
ಕಣ್ಣಿಗಮಿತಾನಂದವೀಯುವ ದಿವ್ಯ ತೇಜೋ ಮಂದಿರ
ಶಿಶಿರ ಶೀಕರ ವರ್ಷಧಾರೆಯ ಕರೆಯುತಿರುವ ಸುಧಾಕರ
ಓಪವಿರಹದ ನಿಶಿತಬಾಣದೆ ಗಾಸಿಗೊಂಡಿಹ ಸತಿಯರ
ಉರಿಸಿ ನೋಯಿಸಿ ನಗುವನೆಂತೀ ಹಾಲಿನಂತಹ ಹಿಮಕರ.

ಮಾರುತ

ತೆನೆಯ ಭಾರಕೆ ಬಳುಕಿ ನಿಂದಿಹ ಶಾಲಿವನಗಳ ತೂಗುತ
ಸುಮದ ಭಾರಕೆ ಬಾಗಿನಿಂದಿಹ ತರುಸಮೂಹವ ನೂಗುತ
ಬಿರಿದ ತಾವರೆಯರಳ ಬಳ್ಳಿಯ ತೊನೆದು ಮುಂದಕೆ ಸಾಗುತ
ನಲಿವ ಯುವಜನ ಮನವ ಚಲಿಸುವನಿಂತು ಬೀಸುತ ಮಾರುತ.

### ವಾಹಿನಿ

ಹೊಳೆಯುವ ಸುಂದರ ಮರಿಮಿನುಗಳೆ
ಚಿನ್ನದ ಹೊಸ ಕಟಿ ಸೂತ್ರವೆನೆ
ದಡದಲಿ ಕುಳಿತಿಹ ಬೆಳ್ಳಕ್ಕಿಗಳೆ
ಮುತ್ತಿನ ನವಮಣಿ ಹಾರವೆನೆ
ಹಸರಿಸಿ ತೋರುವ ಪುಳಿನವಿತಾನವೆ
ಸುಂದರ ತೋರ ನಿತಂಬವೆನೆ
ಮಂದಗಮನದಲಿ ಹರಿವಳು ವಾಹಿನಿ
ಪ್ರೇಮೋನ್ಮಾದದ ಯುವತಿಯೆನೆ.

### ಸರೋವರ

ಸಾರಸಗಳೊಂದಾಗಿ ಮುದದಿಂದ ನಲಿದುಲಿಯೆ
ನೀಲ ನೈದಿಲೆಯರಳಿ ಕಂಪನೆರೆಯೆ
ಉದಯ ಮಂದಾನಿಲನ ಮೃದುಲ ಸೋಂಕಿನೊಳಾದ
ವೀಚಿಮಾಲೆಯ ಲೋಲ ಲೀಲೆ ಮೆರೆಯೆ
ಸುಂದರ ಸರೋವರಗಳಿಂದು ಸುಮನೋಹರಗ-
ಳಾಗಿ ಸೆರೆಗೈದಿಹವು ರಸಿಕರೆದೆಯ.

### ಕೋವಿದಾರ

ಸುಳಿಯುವೆಲರಿಗಲುಗುತಿರುವ ಕೊನೆಗಳಂದವಾಗಿರೆ
ತಳಿರಿನಿಂದ ಹೇರಿನಿಂದ ಹೂಗಳರಳಿ ಮೆರೆದಿರೆ
ಬಂಡನುಂಡ ದುಂಬಿವಿಂಡು ಝೇಂಕರಿಸುತ ಮೊರೆದಿರೆ
ಕೋವಿದಾರ ಮರವಿದಾರ ಮನವ ಸೂರೆಗೊಳ್ಳದು!

### ಉಪವನ

ಶೇಫಾಲಿಕಾ ಕುಸುಮದೊಂದು ನರುಗಂಪಿನಲಿ
ಪಕ್ಷಿ ಪರಿಷತ್ಸಭೆಯ ಜೇನ್ದನಿಯಲಿ
ಮತ್ತೆ ನೈದಿಲೆಗಣ್ಣಿನೆರಳೆಗಳ ಮೇಳದಲಿ
ಅಕ್ಷಿಗಮೃತವನೀವ ಚಂದ್ರಿಕೆಯಲಿ
ಮತ್ತಿತರ ಹಲವಾರು ಚೆಲುವಿನಾಲೋಕದಲಿ
ಮೆರೆವುದೀ ಉಪವನವು ಶರದದಲ್ಲಿ.

### ವನಲಕ್ಷ್ಮಿ

ಕುಣಿಯಲೊಲ್ಲದ ನವಿಲನುಳಿದು ವನಲಕ್ಷ್ಮಿ ತಾ-
ನಲಿಯುವರಸಂಚೆಗಳನೊಲಿಸುತಿಹಳು.
ಮೊಲ್ಲೆ ಮಾಲತಿ ಬಕುಳ ನೀಪಗಳ ತಾನುಳಿದು
ಕಂಪುಗುವ ಏಳಿಲೆಯನರಸುತಿಹಳು.

### ಶ್ಯಾಮಾಲತೆ—ಮಾಲತೀಲತೆ

ಕುಸುಮಭಾರಕೆ ಬಾಗಿ ತೂಗಿ ನನೆಕೊನೆವೋಗಿ
ಶ್ಯಾಮಾಲತಾಳಿಯಿದು ತೊನೆದು ತೊನೆದು
ಮಣಿದೊಡವುಗಳ ಧರಿಸಿದಂಗನೆಯ ನಿಡುದೋಳ
ಕಾಂತಿಯನ್ನಪಹರಿಸುವಂತೆಸವುದು.
ಸುಂದರ ಅಶೋಕ ಸುಮದೊಡನೆ ಬಿರಿದರಳಿರುವ
ನವ ಮಾಲತೀಲತೆಯ ಕುಸುಮ ಕಾಂತಿ
ನಗುಮೊಗದ ಲಲನೆಯರ ಸುಲಿಪಲ್ಲಿನಿಂದೊಗೆದ
ಸ್ಮಿತ ಚಂದ್ರಕಾಂತಿಯಂತೆಸೆಯುತಿಹುದು.

### ಕಮಲ—ಕುಮುದ

ಉದಯಕಾಲದ ರವಿಯ ಕಿರಣಗಳಿಂದಲೆಚ್ಚರಗೊಳ್ಳುತೆ
ಚಾರುವನಿತೆಯ ವದನ ಕಾಂತಿಯವೋಲು ಪಂಕಜವರಳಿತು
ನಲ್ಲನಗಲಿದ ನಲ್ಲೆ ಮೊಗದೊಳು ನಗೆಯು ಕುಂದುವ ತೆರದೊಳು
ಚಂದ್ರಬಿಂಬವು ಕಂದಿತಾಗಳೆ ಕುಮುದ ಬಾಡಿತು ಮುಸುಳಿತು

### ಶರದಾನಂದ

ಕುಮುದದರಳ ಸಂಗದಿಂದೆ ಶೀತವಾದ ಮರುತನಿಂ
ವಿಗತಜಲದ ವೃಂದದಿಂದೆ ರಮ್ಯವಾದ ದಿಶೆಗಳಿಂ
ಕೊಳೆಯನುಳಿದ ನೀರಿನಿಂದೆ ಕೆಸರುಗಳೆದ ಕೊಳಗಳಿಂ
ವಿಮಲ ಚಂದ್ರಕಿರಣದಿಂದೆ ಸೂಡಿದಿಲ ಬಾನಿನಿಂ
ಮೆರೆವ ಶರತ್ಕಾಲವಿಂದು ಮನಕೆ ಮುದವನೀಡುಗುಂ.

## ಶಾರದ ಶ್ರೀ

ಕಾಶಕುಸುಮಗಳಿಂದೆ ಮೋದಿಸಿ
ಚಂದ್ರಕಿರಣಗಳಿಂದೆ ಯಾಮಿಸಿ
ಹಂಸನಿವಹಗಳಿಂದೆ ವಾಹಿಸಿ
ಬೆಳ್ಪನಾಂತಿವೆ ಮೋಹಿನಿ.

## ವರ್ಣವಿಭವ

ಬಂದುಗೆ ಹೂವಿನ ದೂಳಿನ ಬಣ್ಣದೆ ಕೆಂಪಗೆ ನೆಲಪಿರಲು
ಮಾಗಿದ ಶಾಲಿಯ ತೆನೆಗಳ ಬಣ್ಣದೆ ಹಳದಿಯ ಹೊಲವಿರಲು
ಅರೆದಿಹ ಕಾಡಿಗೆಯಂದದ ಬಣ್ಣದೆ ನೀಲಿಯ ನಭವಿರಲು
ಈ ನೆಲ ಹೊಲ ಆಕಾಶಕೆ ಸೋಲದದಾವನ ಮನದೊಲವು.

## ಶಾರದ ವೈಭವ

ಅರಳಿದಂಭೋರುಹಗಳತಿಶಯದ ಶೋಭೆಯಲಿ
ವನಿತೆಯರ ಮುಖಚಂದ್ರ ಮಸುಳುತಿಹುದು
ನೀಲ ನೈದಿಲೆಯರಳಿನಸಮಾನ ಕಾಂತಿಯಲಿ
ಮದಕಲ ವಿಲೋಚನದ ಹೊಗರಳಿಸುತಿಹುದು
ತೆಳ್ಳನೆಯೆ ಸುಳಿವಲೆಯ ಮುರಿಗಳೆಸಕಂಗಳಲಿ
ಅವರ ಹುಬ್ಬಿನ ಮಣಿತವಳಿಸುತಿಹುದು
ಮದಿಸಿದರಸಂಚೆಗಳ ಲಲಿತ ಗತಿಗಮನದಲಿ
ಚಾರು ಸುಂದರ ನಡಿಗೆ ಸೋಲುತಿಹುದು.

## ಪಥಿಕ

ಅರಳಿದುತ್ಪಲಂಗಳಲ್ಲಿ ಅಸಿತ ನಯನ ಲಕ್ಷ್ಮಿಯುಂ
ಮತ್ತ ಹಂಸದುಲಿಗಳಲ್ಲಿ ಕ್ವಣಿತ ಕನಕಕಾಂಚಿಯುಂ
ಬಂಧುಜೀವದೆಸಳಿನಲ್ಲಿ ಅಧರ ರುಚಿರ ಕಾಂತಿಯುಂ
ಕಂಡು ಪಥಿಕ ಜನಗಳಲ್ಲಿ ನಮೆವರೆನಿತು ಭ್ರಾಂತಿಯುಂ.

ಶೃಂಗಾರ

ಕಪ್ಪಗೆ ಹೊಳೆಯುವ ಸೋಗೆ ಮುಡಿಯಲಿ
ಮಾಲತಿ ಹೂಗಳ ಸಿರಿಮಾಲೆ
ಕಾಂಚನಕುಂಡಲ ಹೊಳೆಯುವ ಕಿವಿಯಲಿ
ಬಗೆ ಬಗೆ ನೈದಿಲೆಯವತಂಸ
ಎದೆಯಲಿ ಚಂದನ ರಸದನುಲೇಪನ
ಕೊರಳಲಿ ಮುತ್ತಿನ ಮಣಿಹಾರ.
ಚರಣಕಮಲದಲಿ ಝಣ ಝಣ ನೂಪುರ
ಕಟಿಯಲಿ ನವ ಕಾಂಚೀದಾಮ
ಇಂತೀ ಪರಿಯಲಿ ಮೆರೆದಿದೆ ಸುಂದರ
ವಧುಗಳ ಶರದದ ಶೃಂಗಾರ.

ಶಾರದ ಶ್ರೀಕಾಂತೆ

ರಮಣಿಯರ ವದನದಲಿ ಚಂದಿರನ ಕಳೆಯಿರಿಸಿ
ಕಾಲಿನಂದುಗೆಗಳಲಿ ಅಂಚೆಯುಲಿಯಿರಿಸಿ
ಅವರ ಚೆಂದುಟಿಗಳಲಿ ಬಂಧೂಕ ಕಳೆಯಿರಿಸಿ
ಶಾರದ ಶ್ರೀಕಾಂತೆ ವೈಗರೆದಳರಸಿ.

ಸ್ವಸ್ತಿ

ವಿಕಚಕಮಲವಕ್ತ್ರದಿಂ ಪ್ರಫುಲ್ಲ ಉತ್ಪಲಾಕ್ಷಿಯಿಂ
ಪೂರ್ಣ ಶುಭ್ರ ಚಂದ್ರನಿಂ ಪ್ರಪೂರ್ಣವಾದ ಕಾಂತಿಯಿಂ
ಬಿರಿದ ಬಿಳಿಯ ಕಾಶದಿಂ ಪ್ರಕಾಶವಾದ ವಸನದಿಂ
ಮತ್ತ ಯುವತಿಯಂದದಿಂ ಪ್ರಮೋದವಾಂತ ಶಾರದಂ
ಹೃದಯದುನ್ನತಾಶೆಯಂ ಪ್ರದಾನಗೈಯಲಾವಗಂ.

# ಹೇಮಂತ ಋತು ವರ್ಣನೆ

## ಆಗಮನ

ಗಿಡಮರದ ಕೊನೆಗಳಲಿ ಹೊಸ ಚಿಗುರನಿರಿಸಿ
ಶಾಲಿವನಗಳ ಬೆಳಸಿ ಬಾಗೆ ಹೂ ಬಿರಿಸಿ
ತಾವರೆಯ ಮೊಗವಿಳಿಸಿ ಬಿಳಿ ಮಂಜು ಸುರಿಸಿ
ಹೇಮಂತ ಋತುರಾಜನೈತರುವನರಸಿ.

## ವಸುಂಧರೆ

ಬೆಳೆದ ಶಾಲಿವನಗಳಿಂದು ಕಣ್ಣಿಗಂದವಾಗಿರೆ
ನಲಿವ ಹರಿಣನಿವಹವಂತೆ ಮನವನತ್ತ ಸೆಳೆದಿರೆ
ಮತ್ತ ಕ್ರೌಂಚದುಲಿಗಳೆಮಗೆ ಕಿವಿಗೆ ಮಧುರವಾಗಿರೆ
ನೋಡಲೆನಿತು ರಮ್ಯವಾಗಿ ಮೆರೆವುದೀ ವಸುಂಧರೆ.

## ಸರಸಿ

ಅರಳಿದುತ್ಪಲಂಗಳಿಂದು ಕಣ್ಣಿಗಂದವಾಗಿರೆ
ಮದಿಸಿದಂಚೆಯುಲಿಗಳೆಮಗೆ ಕಿವಿಗೆ ಮಧುರವಾಗಿರೆ
ಶುಭ್ರ ಸರೋವರದ ಸಲಿಲ ಸವಿಗೆ ಸ್ವಾದುವಾಗಿರೆ
ಸರಸಿಯೆನಿತು ನಲವನೀವುದದರ ಬಳಿಯೊಳೈತರೆ !

## ಪ್ರಿಯಂಗು ಲತೆ

ಸುರಿವ ಮಂಜುಸೋನೆಯಿಂದ ಗಾಳಿ ಶೀತವಾಗಿರೆ
ಮಾಗಿದೀ ಪ್ರಿಯಂಗುಲತೆಯು ನೆಲವು ಸಿರುತ ಚಲಿಸಿರೆ
ನಲ್ಲನಿಂದ ಬೇರೆಯಾದ ನಲ್ಲೆಯಂತೆ ತಾನಿರೆ
ತೋರ್ಪುದಿದರ ಮೊಗವು ಬಾಡಿದಂತೆ ಬೆಳ್ಪಗಾಗಿರೆ.

## ಸಿರಾಭರಣ ಸುಂದರಿ

ರತ್ನಖಚಿತ ಕಾಂಚಿದಾಮ ಯುವತಿಜನರ ಕಟಿಯೊಳಿಲ್ಲ
ಹಂಸದಂತೆ ಸಿನದಗೈವ ನೇವುರಂಗಳಡಿಯೊಳಿಲ್ಲ
ಕುಮುದದಂತೆ ಮೃದುಲಮಾದ ಹಾರ ಕೊರಳೊಳೆಸೆವುದಿಲ್ಲ
ಹಿಮದವೋಲು ಬೆಳ್ಳಗಿರುವ ಚಂದನರಸ ಎದೆಯೊಳಿಲ್ಲ
ಶಶಿಯವೋಲು ತಣ್ಣಗಿರುವ ವಸನದುಡಿಗೆ ತನುವೊಳಿಲ್ಲವು.

## ಪ್ರಣಯಭಿಕ್ಷೆ

ಸೋಗೆವೊಲು ಸೊಂಪಾದ ತಮ್ಮ ಸಿರಿಮುಡಿ ಬಿಚ್ಚಿ
ಅಗರು ಧೂಪದ ಹೊಗೆಯ ಕಂಪನೆರೆದು
ಕಮಲದೊಲು ಸೊಗಸಾದ ತಮ್ಮ ನಗೆಮೊಗ ಮೆಚ್ಚಿ
ಮಕರಿಕಾಪತ್ರಗಳನೊಲಿದು ಬರೆದು
ಪತಿಗಳಾಲಿಂಗನದ ಅಮೃತದಾನಂದವನು
ಸವಿದು ನಲಿವಾತುರದಿ ಸತಿಯರಿಂದು
ಪ್ರಿಯರ ಬಳಿಗೈತಹರು ಪ್ರೇಮಪುಳಕಿತರಾಗಿ
ಕಾತರತೆಯೊಡಮೂಡಿ ವಿವಶರಾಗಿ.

## ಸ್ವಸ್ತಿ

ಸುರಿವ ಮಂಜು ಸೋನೆಯಿಂದ ಶೀತಮಾಗಿ ತೋರುತ
ಕ್ರೌಂಚಪಕ್ಷಿಯುಲಿಗಳಿಂದೆ ಕಿವಿಗೆ ಇಂಪನೆರೆಯುತ
ಬೆಳೆದ ಶಾಲಿವನಗಳಿಂದೆ ಕಣ್ಗೆ ಸೊಂಪ ಬೀರುತ
ತನ್ನನಂತ ಗುಣಗಳಿಂದೆ ನಮ್ಮ ಮನವ ಸೆಳೆಯುತ
ಬಂದ ಹೇಮಂತ ಕಾಂತೆ ನಿನಗೆ ಸುಖವನೀಯಲಿ.

# ಶಿಶಿರ ಋತು ವರ್ಣನೆ

ಆಗಮನ

ಹೇ ವರೋರುಹೆ ನೋಡು ಶಿಶಿರನೈತಹನಿಂದು
ಶಾಲಿವನಗಳ ಬೆಳಸಿ ಕಬ್ಬು ಬಲಿಸಿ
ಕ್ರೌಂಚಪಕ್ಷಿಯನುಲಿಸಿ ಕುಳಿರ್ನೈಕಿಲ ಸುರಿಸಿ
ಕಾಮಭಾವವ ಬಳಸಿ ಮೋದಕೆಳಸಿ.

ಶಿಶಿರ ರಜನಿ

ಸುರಿವ ಹಿಮಸಮೂಹದಿಂದಲಮಿತ ಶಿಶಿರತೆಯನು ಪಡೆದು
ಮಂಜು ಚಂದ್ರಕಿರಣದಿಂದಲತುಳಶೈತ್ಯವಾಂತು ಸೆಡೆದು
ಮಲಿನವಾದ ಕಾಂತಿಯಿಂದಲೆಸೆವನಂತ ಚುಕ್ಕಿ ಮುಡಿದು
ನಡುಗುತಿರುವ ರಜನಿಯಿಂದು ಜನರ ಮನವ ರಮಿಸದು

ಶೀತಲ ಶಿಶಿರ

ಚಂದ್ರನ ಕಿರಣದೆ ಶೀತಳವಾಗಿಹ ಚಂದನ ರಸವೋ
ಶರದದ ತಿಳಿಬೆಳುದಿಂಗಳೊಳೆಸೆಯುವ ಮಹಡಿಯ ಮನೆಯೋ
ಸಂತತ ಸುರಿಯುವ ಹಿಮದೊಳು ನಾಂದಿಹ ತಣ್ಣನೆ ಗಾಳಿಯೊ
ರಸಿಕರ ಮನವನು ಮಾಗಿಯ ದಿನವೊಳಗಾವುದು ರಮಿಸೀತು !

ಪಾತ್ರಿಕೆ

ಮುಚ್ಚಿದ ಕಿಟಕಿಯ ಮನೆಯೊಳಗಿಹರು
ಬೆಚ್ಚನೆ ಹೊದಿಕೆಯ ಹೊದೆಯುವರು
ಬಿಸಿಲಿಗೆ ಬೆಂಕಿಗೆ ಮೈಯಾನುವರು
ಮೆಚ್ಚಿನ ಓಪಳನೆಳಸುವರು.

ಸಜ್ಜಿಕೆ

ಮನಸೆಳೆವಂದದ ಕಂಚುಕ ತೊಟ್ಟು
ಸುಂದರ ರೇಸಿಮೆಯುಡೆಯುಟ್ಟು
ಮಘುಮಘಿಸುವ ಹೊಸ ಹೂವನು ಮುಡಿದು
ಕಪ್ಪುರ ವೀಳೆಯವನು ಸವಿದು
ಶಿಶಿರಾಂಗನೆಯನಲಂಕರಿಪಂತೆ
ರಮಣಿಯರೆಸೆಯುವರೆಲೆ ಕಾಂತೆ !

ಸಂಗಮ

ಹೂ ಹಣ್ಣು ಹಾಲಿರಿಸಿದೆಲೆಯಡಕೆ ತಟ್ಟೆಯನು
ಹಿಡಿದಂತೆ ಮೃದುವಾಗಿ ನಡೆದು ಬಂದು
ಕರಿಯಗರುಗಂಧದಿಂ ಘಮಘಮಿಸುವೊಳಮನೆಯ
ಸಾರುವರು ಸಂತಸದೆ ಸತಿಯರಿಂದು.

ನಲ್ಮೆ

ತಮ್ಮ ಹೃದಯೇಶ್ವರರ ಮುನ್ನಿನಪರಾಧಗಳ
ಮರೆತು ಮನ್ನಿಸಿ ಮತ್ತೆ ಪ್ರೀತರಾಗಿ
ಬಳಿಗೆ ಬಹ ಸುದತಿಯರ ನಲ್ಲರಾದರಿಸುವರು
ಪ್ರೇಮಪೂಜೆಗೆ ಮೊದಲೆ ಸಿದ್ಧರಾಗಿ.

ಗೃಹಲಕ್ಷ್ಮಿ

ಕನಕ ಕಮಲದವೋಲು ರಮಣಿಯರ ಮೊಗವಿರಲು
ತೊಂಡೆಹಣ್ಣಿನವೋಲು ಚೆಂದುಟಗಳಿರಲು
ಕಿವಿವರೆಗೆ ನಿಡಿದಾಗಿ ಕೊನೆಗಳಲಿ ಕೆಂಪಾಗಿ
ರಮಣಿಯರ ನಯನಂಗಳಂದವಾಗಿರಲು
ನಿಡಿದಾದ ಕಬರಿಭರ ಸೋಗೆವೊಲು ಚೆಲುವಾಗಿ
ಹೆಗಲಿನಿಂದಿಳಿದಂತೆ ಹಸರಿಸಿರಲು
ನಗುನಗುತ ನಿಂದಿರುವ ಗೃಹಲಕ್ಷ್ಮಿಯಂದದಲಿ
ಮನೆ ಮನೆಯ ಬಾಗಿಲಲಿ ಕುಲವಧುಗಳಿಹರು.

ಸಜ್ಜಿಕೆ

ಮನನೆಳೆವಂದದ ಕಂಚುಕ ತೊಟ್ಟು
ಸುಂದರ ರೇಸಿಮೆಯುಡೆಯುಟ್ಟು
ಮಘುಮಘಿಸುವ ಹೊಸ ಹೂವನು ಮುಡಿದು
ಕಪ್ಪುರ ವೀಳೆಯವನು ಸವಿದು
ಶಿಶಿರಾಂಗನೆಯನಲಂಕರಿಸಂತೆ
ರಮಣಿಯರೆಸೆಯುವರೆಲೆ ಕಾಂತೆ!

ಸಂಗವು

ಹೂ ಹಣ್ಣು ಹಾಲಿರಿಸಿದೆಲೆಯಡಕೆ ತಟ್ಟೆಯನು
ಹಿಡಿದಂತೆ ಮೃದುವಾಗಿ ನಡೆದು ಬಂದು
ಕರಿಯಗರುಗಂಧದಿಂ ಘಮಘಮಿಸುವೊಳಮನೆಯ
ಸಾರುವರು ಸಂತಸದೆ ಸತಿಯರಿಂದು.

ನಲ್ಮೆ

ತಮ್ಮ ಹೃದಯೇಶ್ವರರ ಮುನ್ನಿನಪರಾಧಗಳ
ಮರೆತು ಮನ್ನಿಸಿ ಮತ್ತೆ ಪ್ರೀತರಾಗಿ
ಬಳಿಗೆ ಬಹ ಸುದತಿಯರ ನಲ್ಲರಾದರಿಸುವರು
ಪ್ರೇಮಪೂಜೆಗೆ ಮೊದಲೆ ಸಿದ್ಧರಾಗಿ.

ಗೃಹಲಕ್ಷ್ಮಿ

ಕನಕ ಕಮಲದವೋಲು ರಮಣಿಯರ ಮೊಗವಿರಲು
ತೊಂಡೆಹಣ್ಣಿನವೋಲು ಚೆಂದುಟಿಗಳಿರಲು
ಕಿವಿವರೆಗೆ ನಿಡಿದಾಗಿ ಕೊನೆಗಳಲಿ ಕೆಂಪಾಗಿ
ರಮಣಿಯರ ನಯನಂಗಳಂದಮಾಗಿರಲು
ನಿಡಿದಾದ ಕಬರಿಭರ ಸೋಗೆವೊಲು ಚೆಲುವಾಗಿ
ಹೆಗಲಿನಿಂದಿಳಿದಂತೆ ಹಸರಿಸಿರಲು
ನಗುನಗುತ ನಿಂದಿರುವ ಗೃಹಲಕ್ಷ್ಮಿಯಂದದಲಿ
ಮನೆ ಮನೆಯ ಬಾಗಿಲಲಿ ಕುಲವಧುಗಳಿಹರು.

# ವಸಂತಋತು ವರ್ಣನೆ

## ಆಗಮನ

ಚಿಗುರಿದಾಮ್ರದೆಳೆಯ ತಳಿರೆ ಹರಿತವಾದ ಬಾಣವೆನಲು
ಝೇಂಕರಿಸುವ ದುಂಬಿವಾಲೆ ಬಿಲ್ಲಿನೊಂದು ಹಗ್ಗವೆನಲು
ಪ್ರಣಯಿ ಜನರ ಮನವಸೆರೆವ ಚೈತ್ರಯೋಧನಿಳೆಗೆ ಬರಲು
ಬಂದನೀವಸಂತರಾಜ ಕಾಂತೆ, ನಾವೆ ಸಂತಸದಲಿ ಸೋಲಲು.

## ವಸಂತ ವೈಭವ

ಕುಸುಮಭರಿತ ತರುಗಳಿಂದ ಕಮಲವನದ ಕೊಳಗಳಿಂದ
ಕಂಪುಸೂಸುವೆಲರಿನಿಂದ ಸೊಬಗುವೆರೆದ ಸಂಜೆಯಿಂದ
ರಮ್ಯವಾದ ದಿನಗಳಿಂದ ರಾಗಭರಿತ ವಧುಗಳಿಂದ
ಸಂತಸವನು ಈವ ಈ ವಸಂತ ಅತಿ ಮನೋಜ್ಞವಾಗಿದೆ

## ವಸಂತಕಾಂತಿ

ಕೊಳದ ಜಲಕೆ ಹೊಳಪನಿತ್ತು ಮಣಿದೊಡವಿಗೆ ತಣುಪನಿತ್ತು
ಪ್ರಮದೆಯರಿಗೆ ಪೆಂಪನಿತ್ತು ಶಶಿಕಿರಣಕೆ ಬೆಳುಪನಿತ್ತು
ಚೂತವನಕೆ ಕೆಂಪನಿತ್ತು ಪರಭೃತಗಳಿಗಿಂಪನಿತ್ತು
ಹೊಸತದೊಂದು ಕಾಂತಿಯಿಂದಲೆಸೆವುದೀ ವಸಂತವು.

## ಮಾರುತ

ಕುಸುಮಿಸಿರುವ ಮಾಮರಂಗಳೆಲೆಯ ಕೊನೆಯನಲುಗಿಸಿ
ದಿಕ್ಕು ದಿಕ್ಕುಗಳಲಿ ಕೋಗಿಲೆಗಳ ದನಿಯ ಪಸರಿಸಿ
ಸುರಿವ ಮಂಜುಹನಿಯ ಸಿಲಿಸಿ ಜನರ ಮನವನರಳಿಸಿ
ಮರುತನಿಂತು ಸುಳಿವನಿಂದು ಚೈತ್ರ ಸಿರಿಯ ಮೆರೆಯಿಸಿ.

### ಧರಿತ್ರಿ

ಉರಿವ ದೀಪಶಿಖಿಯವೋಲು ಕೆಂಪು ಬಣ್ಣದಿಂದಲೆಸೆವ
ಮರುತ ಚಲನೆಯಿಂದ ತೂಗಿ ನೋಡುವವರ ಕಣ್ಣ ಸೆಳೆವ
ಬೆಳೆದರಳಿದ ಕಿಂಶುಕವನರಾಜಿಯಿಂದಲೀ ಧರಿತ್ರಿ
ಕೆಂಪುಬಣ್ಣದುಡೆಯನುಟ್ಟು ನವವಧುವಿನ ತೆರನೊಳೆಸೆವುದು.

### ಪರಭೃತ-ಭೃಂಗ

ಮಾಮರದ ಕೆಂದಳಿರ ತನಿರಸವನೀಂಟಿ ಸವಿದ
ಮತ್ತ ಪರಭೃತವತ್ತ ಕುಕಿಲುತ್ತಿಹುದು
ಇತ್ತ ಹೂಂದಾವರೆಯ ಮಧುರ ಮಕರಂದವನು
ಸವಿದ ಭೃಂಗವದೊಂದು ಮೊರೆಯುತಿಹುದು

### ಗಾನಸುಧೆ

ಪಂಚರಂಗಿನ ಗಿಣಿಯು ಕೆಂಪು ಚುಂಚುವಿನಂತೆ
ಹೊಳೆವ ಕಿಂಶುಕವಿದನು ಇರಿಯುತಲ್ಲಿ
ದೀಪಶಿಖೆವೋಲಿರುವ ಬೆಟ್ಟದಾವರೆ ಹೂವು
ಮದವೇರಿದಿದರೊಡಲ ದಹಿಸುತಲ್ಲಿ
ಅದರಿಂದಲೀ ಬಗೆಯ ಪಂಚಮ ಸ್ವರದಿಂದ
ಊಳುತಿಹುದೀ ಪಿಕವು ಚೈತ್ರದಲ್ಲಿ

### ರಸಾಲ—೧

ಈ ರಸಾಲವು ನೋಡು ಮರುತ ಸಂಚಾಲನದೆ
ಕುಣಿದು ನನೆಕೊನೆವೋಗಿ ಕಣ್ಗಿಂಬಾಗಿ
ಮಾನಿಸಿಯರೆದೆಗಳನು ಉರಿಸಲಣಿಯಾಗುತಿದೆ
ಪಂಚಬಾಣನು ತೊಟ್ಟ ಬತ್ತಳಿಕೆಯಾಗಿ.

### ರಸಾಲ—೨

ಮದಿಸಿದಳಿಸಿಕರಂಗಳಿಸಿದಾಗಿ ಝೇಗರೆಯೆ
ತೆಂಗಾಳಿ ತೆಳುವಾಗಿ ಬಳಿಯೆ ಸುಳಿಯೆ
ಕೊಂಬೇರಿನಂತೆಸೆವ ಹೂಬಂದ ಮಾಮರದೊ-
ಳಾವ ರಸಿಕನ ಮನವು ಸೂರೆಗೊಳದೊ !

### ಅಶೋಕೆ

ಮೊದಲಿಂದ ಕೊನೆವರೆಗೆ ಹವಳದಂತೆಸೆಯುತಿಹ
ಹೂವು ಚಿಗುರುಗಳಿಡಿದ ಈ ಅಶೋಕೆ
ಮೆರೆಯುತಿಹ ರಮಣಿಯರ ಮನವನಿಂದುರಿಸುತಹ
ಶೋಕಗೊಳಿಸುವುದೆಂದು ಹೇಳಲೇಕೆ !

### ಪಾಂಥ

ತಳಿರು ಹೂವು ಹೇರಿನಿಂದ ಆಮ್ರತರುವನೊಂದನು
ಸತಿಯನಗಲಿ ದೂರ ಬಂದ ಪಾಂಥ ನೋಡಿ ನೊಂದನು
ಕಣ್ಣುಮುಚ್ಚಿ ಮೂಗನೊತ್ತಿ ಸುಮ್ಮನಳುತ ನಿಂದನು.

### ವಸಂತಲೀಲೆ

ಚಿಗುರು ಬಿಂಕಗಳನು ಬಲ್ಲ ಸುದತಿಯರ ಸುಹಾಸದಂತೆ
ಹೊಳೆಹೊಳೆಯುತ ಸೊಬಗುವಡೆದ ಕುಂದಕುಸುಮವರಳಲಂತೆ
ಮೆರೆಯುವೀ ವಸಂತನಿಂದು ಯೋಗಿಗಳನೆ ಸೆಳೆವನೆನಲು
ಹೇಳಲಹುದೆ ಪ್ರೇಮಭರಿತ ರಾಗಿಣಿಯರ ಚಿತ್ತದಳಲನು.

### ವಸಂತವಿಜಯ

ಬಂಡನುಂಡ ದುಂಬಿವಿಂಡು ಝೇಂಕರಿಸುತ ಮೊರೆದಿರೆ
ಮುದಿಸಿ ನಲಿದ ಗಂಡುಪಿಕವು ಜೇನಿಂಚರ ಸುರಿದಿರೆ
ಈ ರಸಾಲ ತರುಸಮೂಹ ನನೆಕೊನೆಗಳ ಮೆರೆದಿರೆ
ಕುಸುಮಮಾಸವಿಂದು ಬಂದು ಇಳೆಯುನಾಳಲೆಳಸಿದೆ
ಮಾನಿನಿಯರ ಮನವನಿರದೆ ಘಾಸಿಗೊಳಿಸಲೆಂದಿದೆ.

## ಮದನಾವತಾರ

ಚಂದನದ ರಸದಿಂದ ತೊಯ್ದು ಬೀಸಣಿಗೆಯುಲಿ
ಬೀಸಲೆಚ್ಚರಗೊಂಡು ಎವೆ ಬಿಚ್ಚಿನೋಡಿ
ವಲ್ಲಕಿಯ ಕಾಕಲಿಯ ಮೃದುಮಧುರ ಗಾನದಲಿ
ಹಾಡಲೊಮ್ಮೆಗೆ ಕೇಳಿ ನಲಿದು ಗರಿಮೂಡಿ
ಮುತ್ತಿನೇಕಾವಳಿಯ ಮಾನಿನಿಯುರೊಲವಿನಲಿ
ಕರೆಯೆ ಚೆಚ್ಚರದಿಂದ ಸುತ್ತ ಸುಳಿದಾಡಿ
ಸ್ವಪ್ನಮುದ್ರಿತ ಮದನನಿಂದಜೇಯನವೋಲು
ಕಾರ್ಯ ತತ್ಪರನಾದನೆಲ್ಲರೊಡಗೂಡಿ

## ಕಾತರ

ಮಧುರ ಮಧುರಿಮೆ ವೆರಸಿ ಮಧುಮಾಸವೈತರಲು
ಮತ್ತ ಕೋಕಿಲ ಗಾನ ಮೈಮರೆಸಲು
ಸುತ್ತ ಸೌರಭ ಸೂಸಿ ತೆಂಗಾಳಿ ಸುಳಿದಿರಲು
ಮತ್ತೆ ಮಧುಕರವೃಂದ ಝೇಂಕರಿಸಲು
ಕುಲವಧುಗಳುರೆನೊಂದು ಕಾತರಿಸುತಿಹರಿಂದು
ಮಾರನೆಚ್ಚರಗೊಂಡು ಮೆರೆಯುತಿರಲು.

## ಕಾದಲ

ಕುರವಕದ ಹೂವಿನವೊಲಸಮಾನ ಕಾಂತಿಯುಲಿ
ಹೊಳೆವ ನಲ್ಲೆಯ ಮೊಗಕೆ ಮಾರುವೋಗಿ
ನಲ್ಲನೈತಹನಳುಕಿ ಮಾರನುರುಜೆಗೆ ಸಿಲುಕಿ
ಪ್ರೇಮಭರದಲಿ ಮರೆದು ಸೂರೆವೋಗಿ.

### ಲಲನಾಲೋಕ

ಹೊಸವಿವಾಹದಿಂ ಸಿಮಿರ್ದ ಮೈನವಿರನುರೆತೊಟ್ಟು
ನಯವಾದ ಹೊಸ ಬಿಳಿಯ ದುಗುಲವುಟ್ಟು
ಅಗರು ಚಂದನ ತೊಡೆದು ಕತ್ತುರಿಯ ಬೊಟ್ಟಿಟ್ಟು
ಹೊಳೆವ ಮುತ್ತಿನಹಾರ ಕೊರಳಿಗಿಟ್ಟು
ಇಂತು ಬಗೆಬಗೆಯಾಗಿ ಕಣ್ಣಿಗತಿ ಚೆಲುವಾಗಿ
ಮೆರೆವರೀ ರಮಣಿಯರು ರತಿಯರಾಗಿ

### ಪ್ರಸಾಧನ

ಎದೆಯಲಿ ಚಂದನ ರಸದನುಲೇಪನ
ಕೊರಳಲಿ ಮುತ್ತಿನ ಮಣಿಹಾರ
ಕಟಿಯಲಿ ಸುಂದರ ಕಾಂಚೀದಾಮ
ತೋಳಿಗೆ ಕಂಕಣ ಕೇಯೂರ
ಮೆಯ್ಯೊಳು ತೆಳ್ಳನೆ ರೇಸಿಮೆಯಂಬರ
ಹಣೆಯಲಿ ಕುಂಕುಮ ಕಸ್ತೂರಿ
ಇಂತಿದು ನವಮಧುಮಾಸದ ಸುಂದರ
ರಮಣಿಯರೊಲವಿನ ಸಿಂಗಾರ.

### ಪ್ರತೀಕ್ಷೆ

ನವ ಕುಸುಂಭರಾಗದಿಂದಲರುಣವಾದ ವಸನವುಟ್ಟು
ಗೌರರಾಗರುಚಿರವಾದ ಕಂಚುಕಗಳನೆದೆಗೆ ತೊಟ್ಟು
ಕರ್ಣಿಕಾರ ಕುಸುಮಮಂಜರಿಯನು ಮುದದೆ ಕಿವಿಯೊಳಿರಿಸಿ
ಚಲಿಸುತಿರುವ ಕುಂತಲದಲಿ ಮೊಲ್ಲೆಮುಗುಳ ಮಾಲೆ ಧರಿಸಿ
ಕಾತರದಲಿ ಕಳವಳಿಸುತ ಕುಸುಮಬಾಣಹತಿಗೆ ನೊಂದು
ಪ್ರಿಯರ ಸಂಗಸುಖವ ಬಯಸಿ ಪ್ರೇಯಸಿಯರು ಬರುವರಿಂದು.

## ಪ್ರಗಲ್ಭೆ

ನಿನ್ನೆ ಇರುಳಲಿ ಮುಡಿದ ಕುಸುಮ ಹಾರವನಿಂದು
ಮತ್ತೆ ಮುಂಜಾನೆಯಲಿ ನೋಡಿದವಳು
ಆ ಹಾರ ಬಾಡಿರಲು ಅದನು ತುರುಬಿಂದೆಳೆದು
ಬೇರೊಂದು ಹೂ ಮುಡಿದು ಬರುತಲಿಹಳು

## ಪ್ರಣಯ

ಅರಸಿನ ಕುಂಕುಮ ಶೋಭಿಸುತಿಸದು
ಕಣ್ಣನು ಮೋಹಿಸಿ ಬಳಿಸೇಳಿಯೆ
ಮದನೋದ್ದೀಪಕ ಪಾನವನೊಸೆದು
ಕೈಯೊಳಗಿರಿಸುತ ಸತಿ ಸುಳಿಯೆ
ಆ ಕ್ಷಣ ಆಮೋದಾವೃತನೆನಿಸಿ
ನಲ್ಲೆಯ ನಲ್ಮೆಗೆ ಮನ ಸಲಿಸಿ
ತನ್ನನೆ ಮರೆವನೊ ಪುಳಕಿತನಾಗಿ
ಪ್ರೇಮದಿನಾಲಿಂಗಿತನಾಗಿ.

## ಚೆನ್ನೆ

ತೊಂದಾವರೆವೊಲು ಮೆರೆಯುವ ಮೊಗದಲಿ
ಬೆವರಿನ ಹನಿಗಳ ಮಣಿಮಾಲೆ
ಮಿರುಗುತಲಿರುವುದು ರತ್ನಾಭರಣದೊ-
ಳೊಪ್ಪುವ ಮುತ್ತಿನ ಮಣಿವೋಲೆ

## ಹಾವ

ನಡೆನುಡಿಯೊಳಲಸಿಕೆಯು ತಲೆದೋರುವಂತಾಡಿ
ಸಲಸಲಕೆ ಆಕಳಿಸುವಂತೆ ಮಾಡಿ
ಮಾರಸೀ ವಧುಗಳಲಿ ಬೇರೊಂದು ಹೊಸ ಗಾಡಿ
• ತೋರುವಂತೆಸಗುವನು ಎಂಥ ಮೋಡಿ!

## ಲೀಲೆ

ನಿದ್ರಾಲಸ ವಿಭ್ರಮದಲಿ
ನಡೆ ಎಡಹುತಿರೆ
ಮದಿರಾಲಸ ಸಂಭ್ರಮದಲಿ
ನುಡಿ ತೊದಲುತಿರೆ
ಕುಡಿಹುಬ್ಬಿನ ಚಾಲನದಲಿ
ಕಣ್ ಕೊಂಕುತಿರೆ
ಆಲಿಂಗನದಾತುರದಲಿ
ಮೈ ನಡುಗುತಿರೆ
ಪ್ರೇಮದ ಹೊಸ ಚುಂಬನದಲಿ
ನವಿರೇಳುತಿರೆ
ಮಧುಮಾಸದ ವಧು ಬಳಿಯಿರೆ
ನಲಿವಾಗುತಿರೆ
ಈ ಧರೆಯೇ ಸುರಲೋಕವು
ಅಮರರ್ ಕಾಣಲರೆ.

## ಪ್ರೇಮ ಪೂಜೆ

ತಂಬುಲದ ಚೆಂದುಟಿಯು ಸವಿಗಂಪು ಸೂಸುತಿರೆ
ಹೂ ಮುಡಿಯು ನಲ್ಗಂಪು ಪಸರಿಸಿರೆ
ಕಸ್ತೂರಿ ಶ್ರೀಗಂಧವಂಗಾಂಗವಾವರಿಸೆ
ಉಸಿರ ಸೌಸವವೆಲ್ಲ ದೆಸೆಗೆ ಸೂಸೆ
ಚೆಲುವು ದೇವರಸಿಂದು ಒಲುಮೆ ಹೂಗಳನೆರಚಿ
ಪ್ರೇಮಪೂಜೆಯನೊಲಿದು ಪೂರ್ಣಮಾಡಿ
ನಲ್ಲನಲ್ಲೆಯರಿಹರು ರಸಜೀವದೋಜೆಯಲಿ
ದೇವಲೋಕದ ದಿವ್ಯಗಾನ ಹಾಡಿ.

ಸ್ವಸ್ತಿ

ಮಾಮರದ ಚಾರುತರ ಮಂಜರಿಯೆ ಶರವೆನಲು
ಶೋಭಿಸುವ ಕಿಂಶುಕವೆ ಚಾಪವೆನಲು
ಮೊರೆವ ಭೃಂಗಾವಳಿಯೆ ಮೆರೆವ ಸಿಂಜಿನಿಯೆನಲು
ಅಕಳಂಕ ಚಂದಿರನೆ ಛತ್ರಿಯೆನಲು
ಸುಳಿವ ಮಲಯಾನಿಲನೆ ಮತ್ತವಾರಣವೆನಲು
ಕುಕಿಲಿಡುವ ಪರಭೃತವೆ ವಂದಿಯೆನಲು
ತ್ರಿಜಗವನು ಗೆಲ್ದತನು ಚೈತ್ರನೊಡನೈತರಲಿ
ಕಾಂತೆ ನಿನಗಾವಗಂ ಮುದವೀಯಲಿ.

*

## ಈ ಲೇಖಕರ ಇತರ ಕೃತಿಗಳು

ರಾಗಿಣಿ (ಕವನ ಸಂಗ್ರಹ)

ಜಹನಾರಾ (ಕಥನ ಕವನ)

ಮೇಘದೂತ (ಅನುವಾದ)

ಗಗನ ಚುಕ್ಕಿ (ಕವನ ಸಂಗ್ರಹ)

ಅಕ್ಕಮಹಾದೇವಿ (ಜೀವನ ಚರಿತೆ)



# ಹೊಸ ಪ್ರಕಟನೆಗಳು

**ಬೆರಳ್ ಗೆ ಕೊರಳ್** (ನಾಟಕ)—ಕುವೆಂಪು.... ರೂ. ೧ ೦ ೦

....ಆದಿಪರ್ವದ ನೀರಸವಾದ ಏಕಲವ್ಯೋಪಾಖ್ಯಾನ 'ಬೆರಳ್ ಗೆ ಕೊರಳ್' ನಾಟಕದಲ್ಲಿ....ರಸದ ಬುಗ್ಗೆಯಾಗಿ ಹಿಗ್ಗಿದೆ....ರಸಿಕರ ಕಲ್ಪತರುವಾಗಿದೆ. —ಪುಸ್ತಕ ಪ್ರಪಂಚ.

**ಶ್ರೀ ಸ್ವಾತಂತ್ರ್ಯೋದಯ ಮಹಾಪ್ರಗಾಥಾ**—ಕುವೆಂಪು ೦ ೮ ೦

(ಭಾರತ ಸ್ವತಂತ್ರವಾದ) ರಸನಿಮಿಷದಲ್ಲಿ ಹಾಡಿದ ಮಹಾಗೀತೆ ಇದು. —ಪುಸ್ತಕ ಪ್ರಪಂಚ.

**ಷೋಡಶಿ** (ಪ್ರೇಮಗೀತೆಗಳು)—ಕುವೆಂಪು ರೂ. ೧ ೮ ೦

ಶೃಂಗಾರರಸ ಪ್ರಧಾನವಾದ ಈ ಸಂಗ್ರಹ ಒಂದು ಮಧುಕುಂಜ ಮಂಜರಿಯಾಗಿ ಪರಿಣಮಿಸಿದೆ....'ಕೊಳಲಿ' ನ 'ಗಾನ' ಮತ್ತು 'ನವಿಲಿನ' ನ 'ನೋಟ' ಪ್ರಿಯವಾದ ವಾಚಕವೃಂದಕ್ಕೆ 'ಷೋಡಶಿ' ಪ್ರಿಯವಾಗುವುದು ಖಂಡಿತ -ದೇಶಬಂಧು.

**ನವಿಲು (ಕವನಸಂಗ್ರಹ)** ರೂ. ೧

**ಕಲಾಸುಂದರಿ (ಕವನಸಂಗ್ರಹ)** ರೂ. ೧ ೮ ೦

'ನವಿಲು' ಈ ಹಿಂದೆ ಎರಡು ಭಾಗಗಳಾಗಿ ಪ್ರಸಿದ್ಧವಾದದ್ದು ಈಗ 'ನವಿಲು' ಮತ್ತು 'ಕಲಾ ಸುಂದರಿ' ಎಂಬ ಬೇರೆ ಬೇರೆ ಸಂಗ್ರಹಗಳಾಗಿ ಪ್ರಕಟವಾಗಿದೆ.

**ಸಾಹಿತ್ಯ**—ರವೀಂದ್ರನಾಥಠಾಕೂರ್ ರೂ. ೧

ಸಾಹಿತ್ಯದ ತಾತ್ಪರ್ಯ—ಸಾಹಿತ್ಯದ ಸಾಮಗ್ರಿ—ಸಾಹಿತ್ಯದ ವಿಚಾರಕ—ವಿಶ್ವಸಾಹಿತ್ಯ—ಸೌಂದರ್ಯ ಮತ್ತು ಸಾಹಿತ್ಯ—ಸಾಹಿತ್ಯ ಸೃಷ್ಟಿ— ಸೌಂದರ್ಯಬೋಧೆ ರವೀಂದ್ರನಾಥಠಾಕೂರರ ಈ ಏಳು ಪ್ರಬಂಧಗಳನ್ನು [illegible] ಎ ಎನ್. ನರಸಿಂಹಯ್ಯ ಎಂ. ಎ., ಪಿ. ಎಚ್ [illegible] ಈ ಸಂಗ್ರಹದಲ್ಲಿ ಅನುವಾದಿ

---

ಕಾವ್ಯಾಲಯ * ಪ್ರಕಾಶಕರು * ಮೈಸೂರು